# 46

# ೧೮೫೭ರ "ಸಿಪಾಯಿ ದಂಗೆ"

ಅಥವಾ

## ಬ್ರಿಟಿಷರಿಗೆದುರಾಗಿ
## ಭಾರತೀಯರ
## ಪ್ರಥಮ ಸ್ವಾತಂತ್ರ್ಯ ಸಮರ.


ಲೇಖಕರು:

ಶ್ರೀ। ಕೆ. ಸುಭಾಶ್ಚಂದ್ರ ಶೆಣೈ,

ಬದಿಯಡ್ಕ, ದ. ಕ.



1955.






ಒಂದಾಣೆ ಮಾಲೆ

## ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಅ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧ ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ).
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಸಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯಸಮ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ನಾಲ್ವತ್ತಆರು ಪುಸ್ತಕಗಳಲ್ಲಿ, ನಾಲ್ವತ್ತಆರು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1016 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧

# ೧೮೫೭ರ 'ಸಿಪಾಯಿ ದಂಗೆ'

## ಅಥವಾ

## ಬ್ರಿಟಿಷರಿಗೆದುರಾಗಿ ಭಾರತೀಯರ ಪ್ರಥಮ ಸ್ವಾತಂತ್ರ್ಯ ಸಮರ

---

ಸಾವಿರದ ಎಂಟನೂರ ಐವತ್ತ ಏಳನೇ ಇಸವಿ ಭಾರತದ ಚರಿತ್ರೆಯಲ್ಲೇ ಬಹಳ ಮಹತ್ವವಾದ ವರುಷ!

ನಮ್ಮನ್ನಾಳುತ್ತಿದ್ದ ಬ್ರಿಟಿಷರು ಭಾರತದ ಮೇಲೆ ಮಾಡಿದ ಮತ್ತು ಮಾಡುತ್ತಿದ್ದ ಅಕೃತ್ಯಗಳನ್ನು ಕಂಡು ಭಾರತೀಯರು ಪ್ರಥಮ ಸ್ವಾತಂತ್ರ್ಯ ಸಮರಕ್ಕೆ ಯತ್ನಿಸಿ ತಮ್ಮ ಅಮೂಲ್ಯ ಪ್ರಾಣಗಳನ್ನು ತೆತ್ತ ವರುಷ!

ನಮ್ಮ ಮನೆಯಲ್ಲಿ ನಮಗೆ ಸ್ವಾತಂತ್ರ್ಯ ಇಲ್ಲವೇ ಎಂದು ಭಾರತೀಯರಿಗೆ ಅನಿಸಿದ ವರುಷ!

ಆಂಗ್ಲರ ನೊಗವನ್ನು ಕಿತ್ತೊಗೆಯಲು ಜಾತಿಮತ ಭೇದಗಳನ್ನು ಲೆಕ್ಕಿಸದೆ ಭಾರತೀಯರು ಕ್ರಾಂತಿಯೆದ್ದ ವರುಷ!

ದಿಲ್ಲಿಯ ಮೊಗಲ ಬಾದಶಹ, ನಾನಾಸಾಹೇಬ, ಝಾಂಸಿಯ ವೀರರಾಣಿ ಲಕ್ಷ್ಮೀಬಾಯಿ, ಅಯೋಧ್ಯೆಯ ನವಾಬ, ಮಂಗಲಪಾಂಡೆ, ತ್ಯಾತ್ಯಾಟೋಪಿ ಮೊದಲಾದವರು "ಫಿರಂಗಿ"(ಬಿಳಿಯರು)ಗಳ ಎದುರು ಶಸ್ತ್ರವೆತ್ತಿದ ವರುಷ!

ಲೊರ್ಡ್ ಡಾಲ್‌ಹೌಸಿಯು ೧೮೪೮ನೇ ಇಸವಿ, ಭಾರತಕ್ಕೆ ತಲಪಿ "ಅಖಂಡ ಭಾರತವನ್ನು ಬ್ರಿಟಿಷರ ಅಧಿಪತ್ಯದಲ್ಲಿ ಸೇರಿಸಲು ಬಂದಿಳಿದಿರುತ್ತೇನೆ" ಎಂದಂದಿನಿಂದಲೇ ಭಾರತೀಯರಲ್ಲಿ ಸ್ವಾತಂತ್ರ್ಯ ದಾಹ ಉಂಟಾಗತೊಡಗಿತ್ತು. ಲೊರ್ಡ್ ಡಾಲಹೌಸಿಯ ಕಾರಭಾರವೇ ಸಂಸ್ಥಾನಗಳ ಹಿಂದೀ ರಾಜರಿಗೆ ಸ್ವಾತಂತ್ರ್ಯ ಸಮರಕ್ಕೆಳೆಯಲು ಕಾರಣವಾಯಿತು.

ಲೊರ್ಡ್ ಡಾಲ್‌ಹೌಸಿಯು ಪ್ರಥಮವಾಗಿ ಪಂಜಾಬದಲ್ಲಿ ವೀರನಾಗಿ ಮೆರೆಯುತ್ತಿದ್ದ ರಣಜಿತ ಸಿಂಗನನ್ನು ಎದುರಿಸಿದನು. ರಣಜಿತ ಸಿಂಗನ

ಉಚ್ಚಾಟನೆಯಾಗದೆ ತನ್ನ ಮಾರ್ಗ ಸುಗಮವಾಗದು ಎಂದರಿತು, ಪಂಜಾಬದ ಮೇಲೆ ಅನ್ಯಾಯವಾಗಿ ನಿಷ್ಕಾರಣವಾಗಿ ಧಾಳಿಮಾಡಿದನು. ಜಲಿಯಾನವಾಲದಲ್ಲಿ ಬ್ರಿಟಿಷರಿಗೂ ರಣಜಿತ ಸಿಂಗನಿಗೂ ಘೋರ ಯುದ್ಧವಾಗಿ, ಬ್ರಿಟಿಷರು ಅಪಾರ ನಷ್ಟಕ್ಕೊಳಗಾದರು. ಆದರೆ, ಗುಜರಾತದ ದ್ರೋಹಿಯೋರ್ವನು ಹಿಂದಿನಿಂದ ರಣಜಿತ ಸಿಂಗನನ್ನು ಸೋಲಿಸಿದನು. ರಣಜಿತಸಿಂಗನು ಅನಂತರ ಬ್ರಿಟಿಷರ ಮಿತ್ರನಾಗಬೇಕಾಯಿತು. ಅವನ ಮರಣಾನಂತರ ಪಂಜಾಬು ಬ್ರಿಟಿಷರ ಅಧಿಕಾರಕ್ಕೆ ಸೇರಿತು.

ಮಕ್ಕಳಿಲ್ಲದೆ ಮಡಿದ ಅರಸುಗಳ ರಾಜ್ಯಗಳನ್ನೆಲ್ಲ ಬ್ರಿಟಿಷ ಅಧಿಕಾರಕ್ಕೆ ಸೇರಿಸುವ ಮಹತ್ವಾಕಾಂಕ್ಷೆಯು ಡಾಲ್‌ಹೌಸಿಯಲ್ಲಿ ಬೆಳೆಯಿತು. ದತ್ತಕ್ಕೆ ಪಡಕೊಳ್ಳುವ ಕ್ರಮವನ್ನು ಒಪ್ಪಂದಪ್ರಕಾರ ಬ್ರಿಟಿಷ್ ಸರಕಾರ ಹಿಂದೂ ಕಾಯಿದೆಯ ಮೂಲಕ ಒಪ್ಪಿಕೊಂಡುದನ್ನು ಡಾಲ್‌ಹೌಸಿ ಮನ್ನಿಸದೆ ಹೋದುದು ಸಕಲ ಅರಸರಲ್ಲಿ ಜುಗುಪ್ಸೆಯನ್ನುಂಟುಮಾಡಿತು.

ಸಾತಾರಾ ಅರಸನು ಮಕ್ಕಳಿಲ್ಲದೆ ಸತ್ತನೆಂದು ೧೮೪೮ನೇ ಇಸವಿಯಲ್ಲಿ ಆ ರಾಜ್ಯವನ್ನು ಬ್ರಿಟಿಷ ರಾಜ್ಯಕ್ಕೆ ಸೇರಿಸಿದನು. ೧೮೫೩ನೇ ಇಸವಿಯಲ್ಲಿ ನಾಗಪುರದ ಭೋಸಲೆಯು ದೇಶವೂ, ೧೮೫೪ನೇ ಇಸವಿಯಲ್ಲಿ ಝಾಂಸಿ ರಾಜ್ಯವೂ, ೧೮೫೮ನೇ ಇಸವಿಯಲ್ಲಿ ನರಗುಂದ ಕಿತ್ತೂರ ರಾಜ್ಯಗಳೂ ಮೇಲಿನ ಕಾರಣಗಳಿಂದ ಬ್ರಿಟಿಷ್ ರಾಜ್ಯಕ್ಕೆ ಡಾಲ್‌ಹೌಸಿಯಿಂದ ಸೇರಿಸಲ್ಪಟ್ಟುವು.

ತತ್‌ರೀತಿಯಲ್ಲೇ ಸಂಪನ್ನ ರಾಷ್ಟ್ರವಾದ ಅಯೋಧ್ಯೆಯನ್ನು ಡಾಲಹೌಸಿಯು ೧೮೫೬ನೇ ಇಸವಿಯಲ್ಲಿ ತನ್ನ ರಾಜ್ಯಕ್ಕೆ ಸೇರಿಸಿದನು. ವಾಜೀದ ಅಲ್ಲಿಶಹಾನು ತನ್ನ ಮೊದಲ ನವಾಬರು ಮಾಡಿದ "ಅಯೋಧ್ಯೆಯು ರಾಜ್ಯವನ್ನು ಯಾವ ಕಾರಣದಿಂದಲೂ ವಶಪಡಿಸಿಕೊಳ್ಳಬಾರದು" ಎಂಬ ಕಾರಣವನ್ನಿತ್ತು, ವಿರೋಧ ಸೂಚಿಸಿ, ಬ್ರಿಟಿಷರ ಕುತಂತ್ರ ನಾಶಕ್ಕಾಗಿ, ತಾನು ಆದಷ್ಟು ಬೇಗನೆ ಸ್ವತಂತ್ರನಾಗಬೇಕೆಂದೆಣಿಸಿ ತನ್ನ ಸೈನ್ಯವನ್ನು ಹೆಚ್ಚಿಸಿದರೂ, ಡಾಲ್‌ಹೌಸಿಯ ಕುತಂತ್ರದ ಮುಂದೆ ನವಾಬನ ಆಟ ಸಾಗಲಿಲ್ಲ. ಬ್ರಿಟಿಷ ಸೈನ್ಯವು ಲಕ್ನೋ ಪ್ರವೇಶಿಸಿ, ನವಾಬನನ್ನು ಬಂಧಿಸಿತು.

ಬ್ರಿಟಿಷ ಕಂಪೆನಿ ಸರಕಾರದಿಂದ ಎಂಟು ಲಕ್ಷ ವರ್ಷಾಸನ ಪಡಕೊಂಡು ಎರಡನೇ ಬಾಜಿರಾಯನು ತನ್ನ ಪೇಶ್ವೆ ಪದವನ್ನು ಒಪ್ಪಂವದಂತೆ

ಬ್ರಿಟಿಷರಿಂಗಿತ್ತಿದ್ದನು. ತನ್ನ ನಂತರ ತನ್ನ ವಂಶಜರಿಗೂ ಈ ವರ್ಷಾಸನ ದೊರೆಯಬೇಕೆಂದು, ಬಾಜೀರಾಯನ ಇಚ್ಛೆಯಂತೆ ಕರಾರೂ ಆಗಿತ್ತು. ಬಾಜೀರಾಯನ ಕಾಲಾನಂತರ ನಾನಾಸಾಹೇಬನಿಗೆ ವರ್ಷಾಸನವನ್ನೀಯುವುದನ್ನು ನಿಲ್ಲಿಸಬೇಕೆಂದು ಡಾಲ್‌ಹೌಸಿಯು,—"ಬಾಜೀರಾಯನು ನಾನಾಸಾಹೇಬನ ಬಗ್ಗೆ ಹೇರಳ ದ್ರವ್ಯ ಶೇಖರಿಸಿರುವನು" ಎಂದು ಪ್ರಚುರಿಸಿ, ನೆವಮಾಡಿ, ನಾನಾಸಾಹೇಬನ ವರ್ಷಾಸನವನ್ನು ನಿಲ್ಲಿಸಿದನು.

ಖೇದಗೊಂಡ ನಾನಾಸಾಹೇಬನು ೧೮೫೪ನೇ ಇಸವಿಯಲ್ಲಿ ನ್ಯಾಯಕ್ಕಾಗಿ ಅಜೀಮುಲ್ಲಾಖಾನನನ್ನು ಇಂಗ್ಲೆಂಡಿಗೆ ಕಳಿಸಿದನು. ಅಲ್ಲಿಯೂ ನಾನಾಸಾಹೇಬನಿಗೆ ನ್ಯಾಯ ದೊರಕಲಿಲ್ಲ. ಅದೇ ಸಮಯ ಸಾತಾರೆಯ ರಂಗೋ ಬಾಪೂಜಿಯು ತನಗಾದ ಅನ್ಯಾಯದ ತೀರ್ಮಾನವನ್ನು ಕೇಳಲು ಇಂಗ್ಲೆಂಡಿಗೆ ಹೋಗಿದ್ದನು. ಅಲ್ಲಿಯೂ ಅವನಿಗೆ ನಿರಾಶೆಯ ಉತ್ತರ ದೊರಕಿತು. ಈರ್ವರೂ ಇಂಗ್ಲೆಂಡಿನಿಂದ ಭಾರತಕ್ಕೆ ಮರಳಿದರು.

ನಾನಾಸಾಹೇಬನು ಇದರಿಂದ ಕುಪಿತನಾದನು. ಪೇಶ್ವೆಪದ ಸ್ಥಾಪಿಸಲು ಹೋರಾಡಲು ನಿಶ್ಚಯಿಸಿದನು. ಬ್ರಿಟಿಷರ ಕುತಂತ್ರಕ್ಕೆ ದಂಡವೇ ಮದ್ದು ಎನ್ನುತ್ತ ನಾನಾಸಾಹೇಬನಿಗೆ ನೆರವಾಗುತ್ತೇನೆಂದು ಅಜೀಮುಲ್ಲಾಖಾನನು ಭರವಸೆಯಿತ್ತನು. ಆಗಲೇ ಸಕಲ ಹಕ್ಕು ಬ್ರಿಟಿಷ ಸಾಮ್ರಾಜ್ಯಕ್ಕೆ ಸೇರಿಸಲ್ಪಡುತ್ತದೆ ಎಂದು ಬ್ರಿಟಿಷರ ಆಜ್ಞೆ ಹೊರಟಿತು. ಸಂಘಟನಾಶಕ್ತಿ ಅಪೂರ್ವವಾಗುಳ್ಳ, ವ್ಯಕ್ತಿತ್ವ ಪ್ರಭಾವಿಯಾಗುಳ್ಳ ನಾನಾಸಾಹೇಬನು ಬ್ರಿಟಿಷರ ವಿರುದ್ಧ ಗುಪ್ತ ಸಂಘಟನೆಮಾಡಿಸಿದನು.

ಬ್ರಿಟಿಷರು ೧೮೫೭ನೇ ಮಾರ್ಚ ೨೯ಕ್ಕೆ ಬಂಗಾಲದ ಬರಕಪುರದಲ್ಲಿದ್ದ ಸೇನೆಯೊಂದಕ್ಕೆ ದನದ ಮತ್ತು ಹಂದಿಯ ತುಪ್ಪ ಸವರಿದ ತುಪಾಕಿಗಳನ್ನು ಉಪಯೋಗಿಸಲೇ ಬೇಕೆಂದು ಬಲವಂತಪಡಿಸಿದರು. ಇದರಿಂದ ದಳದ ಎಲ್ಲ ಹಿಂದೀ ಸೈನಿಕರಿಗೆ ಕ್ರೋಧವುಂಟಾಯಿತು. ಆದರೆ, ಸೈನಿಕರು ಬ್ರಿಟಿಷರೆದುರು ತಮ್ಮ ಆಟ ಸಾಗದೆಂದು ಸುಮ್ಮನಾದರು. ಮಂಗಲಪಾಂಡೆ ಎಂಬ ಹಿಂದೀ ತರುಣ ಸೈನಿಕನಿಗೆ ರಕ್ತ ಬಿಸಿಯಾಯಿತು. ತುಂಬಿದ ಬಂದೂಕು ಹಿಡಿದು "ದಂಗೆ ಏಳಿರಿ" ಎಂದು ಇತರರಿಗೆ ಪ್ರೋತ್ಸಾಹಿಸಿದನು. ಸಾರ್ಜಂಟ ಮೇಜರ ಹೂಸನನು ಇದನ್ನು ಸಹಿಸದಾದನು. ಹೂಸನನು ಮುಂದೆ ಬರುವಷ್ಟರಲ್ಲಿ ಪಾಂಡೆಯ ಗುಂಡುಹಾರಿತು. ಹೂಸನನು ಸತ್ತು

ಬಿದ್ದನು. ಲೆಫ್ಟಿನೆಂಟ ಬಾವ್ಹನು ಅಲ್ಲಿಗೆ ಬಂದನು. ಅವನೂ ಪಾಂಡೆಯ ಗುಂಡಿಗೆ ಭೂಮಿಗೆರಗಿದನು; ಇದನ್ನರಿತು ಮೇಜರ ಹ್ವೀವರ್ಸನನು ಸೈನ್ಯದೊಂದಿಗೆ ಮಂಗಲಪಾಂಡೆಯ ಬಂಧನಕ್ಕಾಗಿ ಧಾವಿಸಿದನು. ತಾನಿನ್ನು ಸಾಯುವುದೇ ಲೇಸೆಂದು ಮಂಗಲಪಾಂಡೆಯು ತನ್ನ ಕೈಯಲ್ಲಿರುವ ಬಂದೂಕಿನಿಂದ ತಾನೇ ಗುಂಡುಹೊಡೆದುಕೊಂಡು ಆತ್ಮಬಲಿದಾನಮಾಡಲು ಪ್ರಯತ್ನಿಸಿದನು: ಕಾಡುತೂಸನ್ನು ಹಿಡಿಯದ ಕಾರಣ ಇತರರಿಗೆ ಹತ್ತು ವರ್ಷಗಳ ಕಠಿಣ ಶಿಕ್ಷೆಯಾಯಿತು. ಗಾಯಗೊಂಡ ಪಾಂಡೆಯು ಗಲ್ಲಿಗೇರಿಸಲ್ಪಟ್ಟನು.

ಇದರಿಂದ ಬ್ರಿಟಿಷರ ಅಧೀನದಲ್ಲಿದ್ದ ಇತರ ಸೈನಿಕರಿಗೂ ಹಿಂದೀಯರಿಗೂ ಬಹಳ ಖೇದವಾಯಿತು. ಅವರು ಅತ್ಯಂತ ಪ್ರಕ್ಷುಬ್ಧರಾದರು.

ಇನ್ನು ಯೋಚಿಸದೆ ಗತ್ಯಂತರವಿಲ್ಲವೆಂದು ಕ್ರಾಂತೀಕಾರ ವೀರರು ಅಜೀಮುಲ್ಲಾಖಾನ ಸಮೇತರಾಗಿ ನಾನಾಸಾಹೇಬನ ಮನೆಯಲ್ಲಿ ಮುಂದಿನ ಸಿದ್ಧತೆ ನಡೆಸಿದರು. ಇತರ ಸಂಸ್ಥಾನಿಕರಿಗೂ ಪತ್ರ ಹೋಯಿತು. ಕಾಡುತೂಸಿನ ಪ್ರಕರಣದಿಂದ ನಾನಾಸಾಹೇಬನ ಕೆಲಸಕ್ಕೂ ಸಕಲ ಸಂಸ್ಥಾನೀಯರೂ ಸಹಕರಿಸುವರೆಂದು ಭರವಸೆಗಳ ಪತ್ರ ಬರೆದರು.

ಅಷ್ಟರಲ್ಲಿ ೧೮೫೭ನೇ ಇಸ್ವಿ ಪ್ರಾರಂಭವಾಗಿತ್ತು. ಬ್ರಿಟಿಷ ಆಳ್ವಿಕೆ ಪ್ರಾರಂಭವಾಗಿ ಅಂದಿಗೆ ನೂರು ವರುಷಗಳಾಗಿದ್ದುವು. ನಾನಾಸಾಹೇಬನ ಮುಂದಿನ ರಭಸದ ಸಿದ್ಧತೆ, ಈ ವರ್ಷದಲ್ಲಿ ಬ್ರಿಟಿಷರ ಆಳ್ವಿಕೆ ಕೊನೆಗೊಳ್ಳುವುದು ಎಂಬ ಭಾವನೆಯು ದೃಢವಾಗಿ ಜನತೆಯಲ್ಲಿ ಅಂಕುರಿಸಿತು. ೧೮೫೭ನೇ ಇಸ್ವೀ ಜೂನ್ ೨೩ಕ್ಕೆ ಬ್ರಿಟಿಷರ ಆಳ್ವಿಕೆಗೆ ನೂರು ವರ್ಷ ತುಂಬುವುದು. ಅಷ್ಟರೊಳಗೆ ನಾವೆಲ್ಲರೂ ಸ್ವತಂತ್ರರಾಗಬೇಕೆಂದು ಜಾತಿಮತ ಭೇದವೆಣಿಸದೆ ಪಂಡಿತರೂ ಮೌಲ್ವಿಗಳೂ ಬಿರುಸಿನಿಂದ—ಆದರೆ ರಹಸ್ಯವಾಗಿ—ಪ್ರಚಾರ ಮಾಡಲಾರಂಭಿಸಿದರು. ಈ ಪ್ರಚಾರದಿಂದ ಇವರು ತಮ್ಮ ಸೈನಿಕರನ್ನು ಕ್ರಾಂತಿಗೆ ಸಿದ್ಧಗೊಳಿಸಿದರು. ಕ್ರಾಂತಿ ದೂತನೊಬ್ಬನು ರಕ್ತವರ್ಣದ ಕಮಲವೊಂದನ್ನು ದಳದ ಹಿಂದೀ ಅಧಿಕಾರಿಯ ಕೈಗೆ ಕೊಡುತ್ತಿದ್ದನು. ಆ ಕೆಂಪು ಕಮಲವು ಎಲ್ಲ ಸೈನಿಕರ ಕೈಯಲ್ಲಿ ನಲಿದು ಪುನಹ ಕ್ರಾಂತಿದೂತನಲ್ಲಿ ತಲಪುತ್ತಿತ್ತು. ಶಬ್ದದ ಉಚ್ಚಾರ

ವಿಲ್ಲದೆ ಕ್ರಾಂತಿಸಂದೇಶದ ಕ್ರಮವಾಗಿತ್ತದು. ಎಲ್ಲೆಡೆಗೂ ರಕ್ತಮಯ ವಾಗುವುದು ಎಂಬುದೇ ಅವರ ವಿಶೇಷರೀತಿಯ ಸಂದೇಶವಾಗಿತ್ತು.

ತೀರ್ಥಯಾತ್ರೆಯ ನೆವನದಿಂದ, ಬ್ರಿಟಿಷ ಸರಕಾರಕ್ಕೆ, ಅದರ ಯಾವ ಅಧಿಕಾರಿಗೂ ಸ್ವಲ್ಪದರೂ ಸಂದೇಹಬಾರದಂತೆ ಬೇರೆ ಬೇರೆ ಸಂಸ್ಥಾನಗಳ ಸೈನಿಕ ಶಿಬಿರ, ಮುಖ್ಯ ಪಟ್ಟಣಗಳಿಗೆ ತನ್ನ ಸಂದೇಶವನ್ನು ಮುಟ್ಟಿಸಿದನು. ನಾನಾಸಾಹೇಬನೊಂದಿಗೆ ಕೆಲವು ರೊಟ್ಟಿಗಳೂ ಕ್ರಾಂತಿಯ ಬೇಗೆಯನ್ನು ಹೊತ್ತಿಸಿದುವು. ಎಲ್ಲಿಂದಲೋ ಬರುತ್ತಿದ್ದ ರೊಟ್ಟಿಗಳನ್ನು ಹಳ್ಳಿಗರು ಕ್ರಾಂತಿಯ ಪ್ರಸಾದವೆಂದು ಸ್ವೀಕರಿಸಿ, ಸೇವಿಸಿ, ಪುನಹ ಅಷ್ಟೇ ರೊಟ್ಟಿಗಳನ್ನು ತಯಾರಿಸಿ ಮತ್ತೊಂದು ಹಳ್ಳಿಗೆ ತಲಪಿಸುತ್ತಿದ್ದರು. ಪಂಜಾಬದಿಂದ ಬಂಗಾಲದ ವರೆಗೆ ಈ ರೊಟ್ಟಿಗಳು ಕ್ರಾಂತಿಯ ಸಂದೇಶವನ್ನು ಹರಡಿದುವು.

೧೮೫೭ ಮೇ ೩೧ನೇ ದಿನ ಕ್ರಾಂತಿಯ ದಿನವೆಂದು ನಿರ್ಧರಿಸಿ, ಸಕಲರಿಗೂ ತಿಳಿಸಲ್ಪಟ್ಟರೂ, ಬ್ರಿಟಿಷರಿಗೆ ಇದರ ಅರಿವೇ ಆಗಲಿಲ್ಲ.

ಕಾಡತೂಸಿನ ಪ್ರಕರಣದಿಂದ ರೊಚ್ಚಿಗೆದ್ದ ಬ್ರಿಟಿಷರು ಮೀರತಿನಲ್ಲಿ ಇದರ ಪರೀಕ್ಷೆ ನಡೆಸಿ, ವಿರೋಧ ಸೂಚಿಸಿದವರನ್ನು ನಾನಾ ವಿಧದ ಶಿಕ್ಷೆಗೊಳಪಡಿಸಿದರು. ಇದನ್ನು ಸಹಿಸಲಾರದೆ ಸೈನಿಕರು ರಾತ್ರಿ ಗುಪ್ತ ಸಭೆಗಳನ್ನು ನಡೆಸಿ ೧೮೫೭ನೇ ಮೇ ೧೦ನೇ ರವಿವಾರ ಆಂಗ್ಲರೆಲ್ಲಾ ಇಗರ್ಜಿಗಳಲ್ಲಿರುವಾಗ, ಬಂದಿಗಳಾಗಿದ್ದ ತಮ್ಮ ಬಾಂಧವರನ್ನೆಲ್ಲಾ ಬಿಡಿಸಲು ನಿರ್ಧರಿಸಿ 'ಫಿರಂಗಿಗಳನ್ನು ಕತ್ತರಿಸಿರಿ. ಸೇಡು ತೀರಿಸಿರಿ!' ಎನ್ನುತ್ತ, ನಿಶ್ಚಿತ ಸಮಯಕ್ಕೆ 'ಚಲೋ ದಿಲ್ಲಿ' ಎಂದು ದಿಲ್ಲಿ ಮಾರ್ಗ ಹಿಡಿದರು. ದಿಲ್ಲಿಗೆ ಕ್ರಾಂತಿಕಾರರ ತಂಡ ಮುಟ್ಟಿದ್ದನ್ನು ಕಂಡು ಆಂಗ್ಲರು ದಿಗ್ಗೆಟ್ಟರು. ತಮ್ಮ ದಿಲ್ಲಿ ಸೈನ್ಯವು ಕ್ರಾಂತಿಕಾರ ವೀರರಿಗೆ ಕಾಶ್ಮೀರ ಮಹಾದ್ವಾರ ತೆರೆದು ಸ್ವಾಗತಿಸಿದುದನ್ನು ಕಂಡ ಮೇಲಂತೂ ಆಶೆ ತೊರೆದರು. ಆಂಗ್ಲರ ಚರ್ಚ, ಗ್ಯಾಜೆಟ ಮುದ್ರಣಾಲಯಗಳೊಂದಿಗೆ ಅನೇಕ ಆಂಗ್ಲರು ನಾಶ ಹೊಂದಿದರು. ಮೇ ೧೨ನೇ ತಾರೀಕಿಗೆ ಇಪ್ಪತ್ತೊಂದು ತೋಪುಗಳ ಗರ್ಜನೆಯಿಂದ ದಿಲ್ಲಿಯು ಒಮ್ಮೆ ಸ್ವತಂತ್ರವಾಯಿತು.

ದಿಲ್ಲಿ ಸ್ವತಂತ್ರವಾದ ಕೂಡಲೇ ಕ್ರಾಂತಿಕಾರರ ರಭಸದ ಪರಿಣಾಮ ವಾಗಿ ಮೊಗಲ ಬಾದಶಹನು ಬಹಿರಂಗವಾಗಿ ಕ್ರಾಂತಿಕಾರರನ್ನು ಕೂಡಿ

ದನು. ಕೂಡಿದ ಕೂಡಲೇ "ವೀರರೇ ನಿಮಗೆ ಸಂಬಳ ಕೊಡಲು ನನ ಬೊಕ್ಕಸ ಬರಿದಾಗಿದೆ" ಎಂದು ಸೈನಿಕರಿಗೆ ಅರಿಕೆಮಾಡಿದನು. ಬಾದಶಹ ಅರಿಕೆ ಸೈನಿಕರಲ್ಲಿ ಹೊಸ ಸ್ಫೂರ್ತಿಯುಂಟುಮಾಡಿತು. "ನಿಮ್ಮ ಆಜ್ಞೆ ಸಿಕ್ಕಿದರೆ ಆಂಗ್ಲರ ಎಲ್ಲ ಬೊಕ್ಕಸಗಳನ್ನು ಸುಲಿದು ನಿಮಗೆ ಒಪ್ಪಿಸುವೆವು ಎಂದರು. ಬಾದಶಹನು ಇದಕ್ಕೆ ಒಪ್ಪಿದನು.

ದಿಲ್ಲಿ ತಮ್ಮ ಕೈಬಿಟ್ಟು ಸ್ವತಂತ್ರವಾದ ಸುದ್ದಿಯು ತಿಳಿದ ಬ್ರಿಟಿಷ ಮುಖ್ಯ ಸೇನಾಧಿಪತಿ ಆ್ಯನ್ಸನನಿಗೆ, ಸಿಮ್ಲಾದಲ್ಲಿರುವಾಗ ತಿಳಿಯಿತ ಇನ್ನು ವಿಳಂಬಿಸುವುದು ತರವಲ್ಲವೆಂದು ಅವನು ಪಂಜಾಬದ ಬ್ರಿಟಿ ಅಧಿಕಾರಿಯಾಗಿದ್ದ ಹೆನ್ರಿ ಲಾರೆನ್ಸನ ಮಾತಿನಂತೆ ಪತಿಯಾಳಾ, ನಾಭ ಝಿಂದಾ ಸಂಸ್ಥಾನೀಯರ ಭರವಸೆಯನ್ನೂ ಪಡಕೊಂಡು, ಹೊರಟನ ದಾರಿಯಲ್ಲಿರುವಾಗಲೇ ದಿಲ್ಲಿಯ ಸಮೀಪ ಆ್ಯನ್ಸನನು ಮಾರೀ ಬೇನೆಯಿಂ ಮಡಿದನು. ಬರ್ನಾರ್ಡನೆಂಬ ಬ್ರಿಟಿಷರ ಅಧಿಕಾರಿಗೆ ಅವನ ಸ್ಥಾನ ದೊ ಕಿತು. ಅದೇ ಸಮಯ ಪಂಜಾಬದ ಸಿಕ್ಖರು ಕ್ರಾಂತಿಕಾರರೊಂದಿ ಸೇರದೆ ಬ್ರಿಟಿಷರ ಸೇನೆ ಸೇರಿದರು. ಇದರಿಂದ ಆನಂದಗೊಂಡ ಬರ್ನಾ ರ್ಡನು ದಿಲ್ಲಿಯ ಕಡೆಗೆ ಧಾವಿಸಿದನು. ದಾರಿಯಲ್ಲಿ ಲೆಕ್ಕಮಾಡಲಸಾ ವಾದ ನಿರಪರಾಧಿಗಳನ್ನು ಸಂಹಾರಮಾಡುತ್ತಾ ಸೇಡು ತೀರಿಸುತ್ತಿದ್ದವನ ದಿಲ್ಲಿಗೆ ಸಾಗಲಾರಂಭಿಸಿದನು.

ಬ್ರಿಟಿಷ ಸೈನ್ಯದಲ್ಲಿ ನಲ್ವತ್ತು ಸಾವಿರ ಆಂಗ್ಲರೂ, ನೂರಿಪ್ಪತ್ತೈ ಸಾವಿರ ಹಿಂದೀ ಸೈನಿಕರೂ ಇದ್ದರು. ಈ ಹಿಂದೀ ಸೈನಿಕರು ಸ್ವಾತಂತ್ರ್ಯ ಸಮರಕ್ಕಾಗಿ ಹಾತೊರೆಯುತ್ತಿದ್ದರು. ಈ ಹಿಂದೀ ಸೈನಿಕರು ನಿಶ್ಚಿತ ಸ ಯಕ್ಕೆ ದಂಗೆಎದ್ದಿದ್ದರೆ,ಹತ್ತು ಇಂಗ್ಲೆಂಡುಗಳು ಒಟ್ಟುಗೂಡಿ ಧಾವಿಸಿಬಂದರ ಭಾರತದ ಸ್ವಾತಂತ್ರ್ಯ ಸಮರ ಜಯಪ್ರದವಾಗುತ್ತಿತ್ತು. ಆದರೆ, ಮೀರಠ ಕಾಡತೂಸಿನ ಪ್ರಕರಣವಾಗಿ ಮೂರು ವಾರ ಮುಂಚಿತವಾಗಿ ದ ಎದ್ದದ್ದು, ಕ್ರಾಂತಿಯ ಏಕಕಾಲದ ಕಾರ್ಯಕ್ರಮದಲ್ಲಿ ಹಿಂದುಮುಂದಾದ

ಜೂನ್ ಎಂಟನೇ ದಿನ ಬರ್ನಾರ್ಡನ ಸೇನೆಗಳು ದಿಲ್ಲಿಯ ಮುತ್ತಿದವು. ಅಲ್ಲಿಯೂ ಕ್ರಾಂತಿಕಾರರ ಕಾರ್ಯಕ್ರಮ ಅಸ್ತ್ಯ ಗೊಂಡಿತು. ಇದರಿಂದ ಕ್ರಾಂತಿಕಾರರ ಅವ್ಯವಸ್ಥಿತ ವ್ಯವಸ್ಥೆಯಿಂ ಬ್ರಿಟಿಷರಿಗೆ ತಮ್ಮ ಸೈನ್ಯಬಲವನ್ನು ಹೆಚ್ಚಿಸಲು ಸಾಧ್ಯವಾಯಿತು. ಪಂಜಾ

ದಲ್ಲಿಯು ಶೀಖರ ಸಹಾಯದಿಂದ ಗಡಿನಾಡಿನಲ್ಲಿಯು ಮತ್ತು ಪಂಜಾಬ ದಲ್ಲಿರುವ ಸೈನಿಕರು ಕ್ರಾಂತೀಕಾರರಿಗೆ ಅನುಕೂಲವಾಗಿರುವುದೆಂಬ ಸಂದೇಹ ದಿಂದ ಅವರನ್ನು ಅನಿರೀಕ್ಷಿತವಾಗಿ ನಿಶ್ಯಸ್ತ್ರಗೊಳಿಸಿ, ಅತ್ಯುಗ್ರ ಶಿಕ್ಷೆಗೆ ಗುರಿ ಮಾಡಲಾಯಿತು. ಅಲ್ಲಿ ತಮ್ಮ ಆಂಗ್ಲಸೇನೆಯನ್ನು ಬಲಪಡಿಸಿದ್ದರಿಂದ ಆ ಭಾಗದಲ್ಲಿ ಹೆದರಿಕೆ ಇಲ್ಲದೆ ಇದ್ದರು. ದಿಲ್ಲಿಯನ್ನು ಪುನಃ ಪಡೆಯುವ ಚಿಂತೆ ಮಾತ್ರ ಅವರಲ್ಲಿತ್ತು.

ಅದೇ ವೇಳೆಗೆ ಅಲಹಾಬಾದ, ಬರೇಲಿ, ಬನಾರಸ, ಅಲಿಗಡ ಮೊದ ಲಾದ ಠಾಣ್ಯಗಳು ಕ್ರಮೇಣ ಸ್ವತಂತ್ರಹೊಂದಿದವು. ಭಯಗ್ರಸ್ಥರಾದ ಆಂಗ್ಲರು ನಾನಾಸಾಹೇಬನನ್ನು ನಂಬಿ, ತಮ್ಮ ಬೊಕ್ಕಸದ ಹೊಣೆ ಸಮೇತ ಎಲ್ಲ ಹೊಣೆಯನ್ನೂ ಕೊಟ್ಟರು. ತಮ್ಮ ಹೆಂಡಿರುಮಕ್ಕಳನ್ನು ಸಹ ನಾನಾಸಾಹೇಬನ ಆಶ್ರಯದಲ್ಲಿ ಇಟ್ಟರು. ಇದರಿಂದ ನಾನಾ ಸಾಹೇಬನ ಕಾರ್ಯಕ್ಕೆ ಮತ್ತಷ್ಟು ಪ್ರಯೋಜನವಾಯಿತು. ಅಜೀಮುದ್ದೀನನ ಮುತ್ಸದ್ದಿತನ, ವೀರ ತಾತ್ಯಾಟೋಪಿಯ ಶೂರ ಶೌರ್ಯಗಳ ಸಹಾಯಗಳಿಂದ ನಾನಾಸಾಹೇಬನು ಕ್ರಾಂತಿಕಾರರ ಕೂಡುವಿಕೆಯಿಂದ ಕಾನಪುರ, ಅದರ ಸುತ್ತುಮುತ್ತಲಿನ ಪ್ರದೇಶವನ್ನು ಸ್ವತಂತ್ರಗೊಳಿಸಿದನು. ಇಲ್ಲಿಯ ಕ್ರಾಂತಿ ಕಾರರು ಆಂಗ್ಲರನ್ನು ಬಹಳವಾಗಿ ಅತ್ಯಾಚಾರಗಳಿಗೆ ಗುರಿಮಾಡಿದರು. (ಅತ್ಯಾಚಾರಗಳಿಗೆ ಆಂಗ್ಲರು ಇಲ್ಲಿ ಗುರಿಯಾದುದಕ್ಕೆ ಕಾನಪುರದ ಬಾವಿಯು ಈಗಲೂ ಸಾಕ್ಷಿನುಡಿಯುತ್ತದಂತೆ!)

ಇತ್ತ ಬ್ರಿಟಿಷ ಪಾದ್ರಿಗಳು ತಮ್ಮ ಸ್ವಜಾತೀಯ ಸರಕಾರದ ಅಧೀನ ವಿರುವ ಸ್ಥಳಗಳಲ್ಲಿರುವ ಹಿಂದೀ ಸೈನಿಕರಿಗೆ ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸತೊಡಗಿದರು. ಹೀಗೆ ತಮ್ಮ ಮತದ ಬೆಳವಣಿಗೆಗೆ ಸಾಮ್ಯ ಮಾರ್ಗವನ್ನೇ ಹಿಡಿದು ಮುಂದುವರಿದರು. ಅವರಲ್ಲದೆ ಭಾರತದಲ್ಲಿದ್ದ ಪ್ರತಿಯೊಬ್ಬ ಆಂಗ್ಲ ಅಧಿಕಾರಿಯೂ ತನ್ನ ಕೈಕೆಳಗಿನವರಿಗೆಲ್ಲ ತಮ್ಮ ಮತ ವಾದ ಕ್ರೈಸ್ತಮತವನ್ನು ಸೇರಲು ಉಪದೇಶಿಸುತ್ತಿದ್ದನು. ಜನರಿಗೂ ಸೈನಿಕರಿಗೂ ಈ ರೀತಿಯ ವೃತ್ತಿ ಬಹಳ ಹೆದರಿಕೆಯನ್ನುಂಟುಮಾಡಿತು. ಇವರೆಲ್ಲರೂ ಕ್ರಾಂತಿಕಾರರಿಗೆ ಪ್ರೋತ್ಸಾಹಿಸತೊಡಗಿದರು.

ಕ್ರಾಂತಿ ಅಸ್ತವ್ಯಸ್ತವಾಗಿ ನಡೆಯುತ್ತಿದ್ದರೂ ಬಹಳ ಚಟುವಟಿಕೆ ಯಿಂದ ಮುಂದುವರಿಯುತ್ತಲೇ ಇತ್ತು.

“ಮೇರಿ ಝಾಂಸಿ ನಹಿ ದೂಂಗಿ” ಎಂದು ಖಂಡ ತುಂಡವಾದ ಉತ್ತರವನ್ನಿತ್ತ ಮಹಾರಾಣಿ ಲಕ್ಷ್ಮೀಬಾಯಿಯು ಬ್ರಿಟಿಷರ ವಿರುದ್ಧವಾಗಿ ಕ್ರಾಂತಿಕಾರರ ಮುಂದಾಳ್ತನ ವಹಿಸಿದಳು. ಅವಳ ದತ್ತದ ಮಗನನ್ನು ಬ್ರಿಟಿಷ ಸರಕಾರ ಮಾನ್ಯಮಾಡದ ಸೇಡಿಗಾಗಿ ಬ್ರಿಟಿಷರೊಡನೆ ವೀರಾವೇಶ ದಿಂದ ಹೋರಾಡಿ ಸೋಲನ್ನು ಅನುಭವಿಸಿದಳು. ತನ್ನ ದತ್ತದ ಮಗನನ್ನು ಬೆನ್ನಿಗೆ ಕಟ್ಟಿ, ಓಡಿಸಿ ಬರುತ್ತಿರುವ ಬ್ರಿಟಿಷಸೈನಿಕರಿಗೆ ಸಿಗದೆ ಝಾಂಸಿ ಯಿಂದ ಹೊರಬಿದ್ದಳು.

ಆಗಲೇ ಕಾಲ್ಪಿಯಲ್ಲಿ ತಾತ್ಯಾಟೋಪಿ ಮತ್ತು ನಾನಾಸಾಹೇಬರು ಬ್ರಿಟಿಷರನ್ನಿದಿರಿಸುತ್ತಿದ್ದರು. ಇವರಿಗೆ ಲಕ್ಷ್ಮೀಬಾಯಿ ನೆರವಾಗಿ ತನ್ನ ರಣಪರಾಕ್ರಮವನ್ನು ಮೆರೆಸಿ ಗೋಪಾಳಪುರದ ಯುದ್ಧದಲ್ಲಿ ಕಾದುತ್ತ, ವೀರಸ್ವರ್ಗವನ್ನು ಪಡೆದಳು.

ಇತ್ತ ತಾತ್ಯಾಟೋಪಿಯು ರಣಪರಾಕ್ರಮವು ದಿನದಿಂದ ದಿನಕ್ಕೆ ಹೆಚ್ಚ ತೊಡಗಿತು. ಆಂಗ್ಲಸೈನಿಕರು, ಆಂಗ್ಲಸೇನಾಪತಿಗಳು ಸಹ ತಾತ್ಯಾಟೋಪಿ ಯನ್ನು ಕಂಡು ನಡುಗಲಾರಂಭಿಸಿದರು. ಆದೇ ಸಮಯ ಬಿಹಾರದ ಎಂಭತ್ತು ವರ್ಷದ ರಾಣಾ ಕುವಾರಸಿಂಹನು ಬ್ರಿಟಿಷರನ್ನು ಎದುರಿಸಿದು ದರ ಫಲವಾಗಿ ಕೆಲವೇ ದಿನಗಳೊಳಗೆ ಗಂಗಾ-ಯಮುನೆಗಳ ನಡುವಿನ ಪ್ರದೇಶವೆಲ್ಲ ಬ್ರಿಟಿಷರ ಕೈಬಿಟ್ಟಿತು.

ಬ್ರಿಟಿಷರು ಕಕ್ಕಾಬಿಕ್ಕಿಯಾದರು. ಎಲ್ಲಾ ಪ್ರಾಂತ್ಯಗಳಲ್ಲಿರುವ ತಮ್ಮ ಸೈನ್ಯವನ್ನು ಹಿಂಪಕ್ಕೆ ಕರೆಸಿ ನೀಲ, ಹ್ಯಾವಲಾಕ, ಔಟ್ರಾಮ್ಮರಂಥ ನುರಿತ ರಣಪ್ರೇಮಿಗಳನ್ನು ಕ್ರಾಂತಿಕಾರರೊಡನೆ ಕಾದಾಡಲು ಕಳಿಸಲಾಯಿತು. ಎಲ್ಲರೂ ನಿರಪರಾಧಿಗಳ ಸಂಹಾರಕ್ಕಿಳಿದರು. ಚಿಕ್ಕ ಬಾಲಕರಿಂದ ಹಿಡಿದು ವೃದ್ಧರ ವರೆಗೆ ಹಲವರು ಬ್ರಿಟಿಷರ ಗುಂಡಿಗಾಹುತಿಯಾದರು. ನ್ಯಾಯಾ ಲಯದಲ್ಲಿ ಎಲ್ಲರನ್ನೂ ವಿಚಾರಣೆಗೊಳಪಡಿಸಿ ಕ್ರಾಂತಿಕಾರರೆಂದೇ ಮಾಡಿ, ಎಲ್ಲರಿಗೂ ದೇಹಾಂತ ಶಿಕ್ಷೆಕೊಡುವಂತೆ ಮಾಡಿದರು. ಹ್ಯಾವಲಾಕನು ಕಾನಪುರಕ್ಕೆ ತೆರಳಿ, ಕಾದುತ್ತಿರುವ ಕ್ರಾಂತಿಕಾರರನ್ನು ಎದುರಿಸಿ, ಅವರನ್ನು ಪರಾಭವಗೊಳಿಸಿ, ಜುಲೈ ಹದಿನೇಳಕ್ಕೆ ಕಾನಪುರವನ್ನು ಸ್ವಾಧೀನಪಡಿಸಿ ಕೊಂಡನು. ಹ್ಯಾವಲಾಕನು ಆಗಲೇ ತನ್ನ ಸೇಡನ್ನು, ಅವರ್ಣನೀಯ ಅತ್ಯಾಚಾರಗಳಿಂದ ತೀರಿಸಿಕೊಂಡನು. ಗಂಗೆ ಯಮುನೆಗಳ ನಡುವಿನ

ಪ್ರದೇಶಗಳನ್ನು ಆಕ್ರಮಿಸಿದನು. ಹ್ಯಾವಲಾಕನ ಸೈನಿಕರು ಪ್ರಾಣದ ಹಂಗುದೊರೆದು ಕಾದುದರಿಂದಲೂ, ಪಂಜಾಬದ ಸಿಕ್ಖರು ಕಳಕಳಿಯಿಂದ ಪ್ರಾಣದ ಪರಿವೆ ಇಲ್ಲದೆ ರಣಭೂಮಿಯಲ್ಲಿ ಆಂಗ್ಲರಿಗಾಗಿ ಕಾದುದರಿಂದಲೂ ಕ್ರಮಶಃ ಗಂಗೆ-ಯಮುನೆಗಳ ನಡುವಿನ ಪ್ರದೇಶವು ಬ್ರಿಟಿಷರ ಕೈಸೇರಿತು.

ದಿಲ್ಲಿಗೆ ಬ್ರಿಟಿಷರು ಹಾಕಿದ ಮುತ್ತಿಗೆಯನ್ನು ನಾಲ್ಕು ತಿಂಗಳು ಕಳೆದರೂ ಹಿಂದೆಗೆಯಲಿಲ್ಲ. ಒಳಗಿದ್ದ ಕ್ರಾಂತಿಕಾರರು ಬ್ರಿಟಿಷರನ್ನೆದುರಿಸುತ್ತಲೇ ಇದ್ದರು. ಮೊಗಲ ಬಾದಶಹನು ವೃದ್ಧನಾದುದರಿಂದ, ಅಷ್ಟು ಶೌರ್ಯದಿಂದ ಕಾದುತ್ತಿರಲಿಲ್ಲ. ನಾನಾಸಾಹೇಬ ಮತ್ತು ತಾತ್ಯಾಟೋಪಿ ದುಆಬ ರಣರಂಗದಲ್ಲಿದ್ದರು.

ಬ್ರಿಟಿಷರಿಗೆ ಮಾತ್ರ ಹೊಸ ಹೊಸ ಸೈನ್ಯ ಬರುತ್ತಿತ್ತು. ಅಗಸ್ಟ ಇಪ್ಪತ್ತೈದಕ್ಕೆ ಪಂಜಾಬದಿಂದ ನಿಕಲ್ಸನನು ತನ್ನ ಸೈನಿಕರೊಂದಿಗೆ ದಿಲ್ಲಿಯ ಬ್ರಿಟಿಷರನ್ನು ಸೇರಿದನು. ನಿಕಲ್ಸನನಿಗೆ ಯುದ್ಧದಲ್ಲಿ ಗಾಯವಾದರೂ ತನ್ನ ಸೈನ್ಯವನ್ನು ಕೋಟೆಯೊಳಗೆ ಹೊಗಿಸಿದನು. ಕ್ರಾಂತಿಕಾರರು ಕೈಕೈ ಕಾಳಗ ನಡೆಸಿದರೂ ಪ್ರಯೋಜನವಾಗದೆ ಬ್ರಿಟಿಷರಿಗೆ ಶರಣಾಗತರಾಗಬೇಕಾಯಿತು. ಬಾದಶಹನು ತನ್ನ ಮೂರು ಮಕ್ಕಳನ್ನು ಬಲಿಗೊಟ್ಟು, ಬ್ರಿಟಿಷರಿಗೆ ಶರಣಾಗತನಾಗಿ, ತನ್ನ ಪ್ರಾಣ ಉಳಿಸಿಕೊಂಡನು.

ಅನಂತರ ಬ್ರಿಟಿಷರು ಸೇಡನ್ನು ತೀರಿಸಲು ಆರಂಭಿಸಿದರು. ದಿಲ್ಲಿಯಲ್ಲಿ ನಡೆದ ಹತ್ಯಾಕಾಂಡ, ಅತ್ಯಾಚಾರಗಳನ್ನು ನೆನೆದರೆ ವೈನವಿರೇಳುತ್ತದೆಂದು ಇತಿಹಾಸಕಾರರು ಬರೆದಿದ್ದಾರೆ. ಜನರಲ್ ಓಟ್ರ್ಯಾಮನು ಇಡೀ ದಿಲ್ಲಿಯನ್ನು ಭಸ್ಮೀಭೂತವನ್ನಾಗಿ ಮಾಡಬೇಕೆಂಬ ಇರಾಧೆಯಲ್ಲಿದ್ದನಂತೆ.

ದುಆಬದಲ್ಲಿದ್ದ ತ್ಯಾತ್ಯಾಟೋಪಿಯೂ, ನಾನಾಸಾಹೇಬನೂ ಸೋಲಬೇಕಾಯಿತು. ಚಾಕಚಕ್ಯದಲ್ಲಿ, ಯುದ್ಧನೀತಿಯಲ್ಲಿ ಆಂಗ್ಲ ವೀರ ಸೇನಾಪತಿಗಳನ್ನೂ ಮೀರಿಸಿದ ತಾತ್ಯಾಟೋಪಿ ಪುನಹ ಸೈನ್ಯ ಕಟ್ಟಿಕೊಳ್ಳಲು ಪ್ರಯತ್ನಿಸಿ, ತನ್ನ ಹತ್ತಿರ ಅಳಿದುಳಿದ ಸೈನಿಕರಿಂದ ಗೋಪಾಳಪುರದಲ್ಲಿ ಪೇಶ್ವೆಪದವನ್ನು ಸ್ಥಾಪಿಸಿ ನಾನಾಸಾಹೇಬನ ಪ್ರತಿನಿಧಿಯೆಂದು ರಾವ್ ಸಾಹೇಬನನ್ನು ನೇಮಿಸಿದನು. ಮರಾಠಾ ಸರದಾರರ ಬೆಂಬಲವಾದರೂ ಇದರಿಂದ ದೊರಕುವುದೆಂಬ ಆಶೆ ಅವನದಾಗಿತ್ತು. ಆದರೆ ಗ್ವಾಲೇರದ

ಸಿಂಧೆ, ಸರ್ ಹ್ಯೂರೋಜನನ ಸ್ನೇಹಿತನಾಗಿದ್ದನು. ಇದರಿಂದ ತಾತ್ಯಾಟೋಪಿಗೆ ನಿರಾಶೆಯಾಯಿತು.

ಗ್ವಾಲೇರದ ಆಶೆತಪ್ಪಿ, ಲಕ್ಷ್ಮೀಬಾಯಿಯ ಆಹುತಿಯಾಗಿ, ನಾನಾಸಾಹೇಬನ ಸೋಲಾಗಿ, ತಾತ್ಯಾಟೋಪಿ ಮರುಗಿದನು. ಅಸಹಾಯ ಶೂರನಾಗಿ ಕಾದಿದನು. ಇಂದೂರವನ್ನು ಕೈವಶಪಡಿಸುವೆನೆಂಬ ದೃಢತೆಯಿಂದ ಅತ್ತ ಧಾವಿಸಿದನು. ಇದನ್ನರಿತ ನಾಲ್ಕು ಜನ ಆಂಗ್ಲ ಸೇನಾಧಿಕಾರಿಗಳು ಇವನ ಬೆನ್ನುಹತ್ತಿದರು. ಆದ್ದರಿಂದ ತಾತ್ಯಾಟೋಪಿ ಇವರಿಗೆ ಅಲ್ಲಲ್ಲಿ ಕದನಕೊಡುತ್ತಾ, ಕೊನೆಗೊಮ್ಮೆ ಹೇಗೂ ನರ್ಮದಾ ನದಿಯನ್ನು ದಾಟಿ ತನ್ನ ಮಹಾರಾಷ್ಟ್ರಕ್ಕೆ ಕಾಲಿಟ್ಟನು. ಅಲ್ಲಿ ಅವನನ್ನು ಕಂಡು ಮಾತನಾಡಲಾರದಾದರು. ಎಲ್ಲರನ್ನೂ ಬ್ರಿಟಿಷರು ತಮ್ಮ ಬಗಲೊಳಗೆ ಸೇರಿಸಿದ್ದರು. ಅಲ್ಲಿಯೂ ಅವನ ಆಶೆ ಫಲಿಸದೆ, ಬಡೋದೆಗೆ ಪ್ರಯಾಣಿಸಬೇಕೆನ್ನುವಷ್ಟರಲ್ಲಿ, ಆಂಗ್ಲರು ಅವನ ಬೆನ್ನುಹತ್ತಿದರು. ಅಲ್ಲಿಗೂ ಅವರಿಗೆ ಹೋಗಲು ಸಾಧ್ಯವಾಗಲಿಲ್ಲ.

ಕೊನೆಗೆ ದೇವಾಸದಲ್ಲಿ ರಾವಸಾಹೇಬನನ್ನು ಕಂಡನು. ಆಗಲೇ ಒಂದು ವರ್ಷ ಕಳೆದಿತ್ತು. ಉತ್ತರ ದೇಶದ ಕ್ರಾಂತಿಕಾರರು ಸಂಪೂರ್ಣವಲ್ಲದಿದ್ದರೂ ಅಲ್ಲಲ್ಲಿನ ಘಟನೆಗಳಿಂದ ನಿರುತ್ಸಾಹಿಗಳಾಗಿದ್ದರು.

ಉತ್ತರ ದೇಶದವರು ನಿರುತ್ಸಾಹಿಗಳಾಗಿದ್ದರೂ ೧೮೫೮ನೇ ಇಸವಿಯಲ್ಲಿ ದಕ್ಷಿಣದಲ್ಲಿರುವ ನರಗುಂದ, ಕಿತ್ತೂರ ಸಂಸ್ಥಾನಗಳು ದಂಗೆ ಎಬ್ಬಿಸಿದವು. ಬಾಬಾಸಾಹೇಬ ಮತ್ತು ಚನ್ನಮ್ಮ ರಾಣಿಯರು ತಮ್ಮ ಸ್ವಾತಂತ್ರ್ಯ ರಕ್ಷಣೆಗಾಗಿ ದಕ್ಷತೆಯಿಂದ ಹೋರಾಡಿದರೂ ವಿಶ್ವಾಸಘಾತಕಿಗಳ ಕುಟಿಲ ಕಾರಸ್ಥಾನದಿಂದ ಇವರಿಗೆ ಯಶಸ್ಸು ದೊರೆಯಲಿಲ್ಲ.

ನರಗುಂದ, ಕಿತ್ತೂರ ಸಂಸ್ಥಾನಗಳ ಸೋಲು ತಾತ್ಯಾಟೋಪಿಯನ್ನು ನಿರುತ್ಸಾಹಗೊಳಿಸಿದರೂ, ಮುಂದಿನ ಯೋಜನೆಗಾಗಿ ಅವನು ರಾವಸಾಹೇಬನಲ್ಲಿ ಚರ್ಚಿಸಿದನು. ಮುಂದಿನ ಕ್ರಾಂತಿಯ ಸನ್ನಾಹಕ್ಕೆ ಅಣಿಗೊಳಿಸುವಷ್ಟರಲ್ಲಿ ಆಂಗ್ಲರು ತಾತ್ಯಾಟೋಪಿಯನ್ನು ಹುಡುಕಿ ಬಂದಿದ್ದಾರೆಂದು ಸುದ್ದಿ ಕೇಳಿ, ಪುನಹ ಪಾರಾಗಿ ಹೋದನು.

ಕೊನೆಗೆ ೧೮೫೯ನೇ ಇಸವಿ ಎಪ್ರಿಲ್ ಏಳಕ್ಕೆ ಗ್ವಾಲೇರದ ಸರದಾರ ಮಾನಸಿಂಗನು ತಾತ್ಯಾಟೋಪಿಯನ್ನು ವಿಶ್ವಾಸಘಾತದಿಂದ ಬ್ರಿಟಿಷರ

ಅಧಿಕಾರಿಯೋರ್ವನಿಗೆ ಹಿಡಿದು ಕೊಟ್ಟನು. ವಿಚಾರಣೆಯು ಹೆಸರಿಗೆ ಮಾತ್ರ ನಡೆದು, ತಾತ್ಯಾಟೋಪಿಯನ್ನು ಎಪ್ರಿಲ್ ಹದಿನೆಂಟಕ್ಕೆ ಗಲ್ಲಿಗೇರಿಸಿದರು.

ನಾನಾಸಾಹೇಬನಂಥ ಚತುರ ಸಂಘಟಕನಿದ್ದರೂ, ತಾತ್ಯಾಟೋಪಿ, ಝಾಂಸಿರಾಣಿಯರಂಥ ವೀರಾಗ್ರಣಿಗಳ ಬಲವಿದ್ದರೂ, ಅಪಾರ ಜನತೆಯ ಸಹಕಾರವಿದ್ದರೂ, ತಮ್ಮ ಪೂರ್ವಾಲೋಚಿತ ಕಾರ್ಯಕ್ರಮವನ್ನು ಪಾಲಿಸದೆ, ಪಂಜಾಬದ ಸಿಕ್ಖರೂ ಸಿಂಧೆ ಹೊಳಕರರೂ ಈ ದಂಗೆಯಲ್ಲಿ ಬ್ರಿಟಿಷರ ದಾಸರಾಗಿ ಸಹಾಯ ಮಾಡಿದ್ದು, ಈ ಕ್ರಾಂತಿಯ ಅಯಶಸ್ಸಿಗೆ ಕಾರಣವಾಯಿತು. ಆದರೆ ಪರಕೀಯರ ಪ್ರಭುತ್ವವನ್ನು ಹಿಂದೂ ಮುಸ್ಲಿಂ ಸ್ಪೃಶ್ಯಾಸ್ಪೃಶ್ಯ ಹೀಗೆ ಯಾವ ಭೇದಭಾವವಿಲ್ಲದೆ ಭಾರತೀಯರು ಎದುರಿಸುವರೆಂಬುವನ್ನು ಇಡೀ ಜಗತ್ತಿಗೆ ತೋರಿಸಿಕೊಟ್ಟಿವೆ.

## ಮಹತ್ವಪೂರ್ಣ ಆಗಸ್ಟ

೧. ೧೯೧೭ನೇ ಇಸವಿ ಆಗಸ್ಟ ೩೦: ಜವಾಬ್ದಾರಿ ಸರಕಾರವನ್ನು ಕ್ರಮಶಃ ಹಿಂದೂಸ್ಥಾನಕ್ಕೆ ಕೊಡಲಾಗುವುದೆಂದು ಭಾರತದ ಮಂತ್ರಿ ಮಾಂಟೆಗ್ಯೂರವರ ಘೋಷಣೆ.

೨. ೧೯೨೦ನೇ ಇಸವಿ ಆಗಸ್ಟ ೧: ಗಾಂಧೀಜಿಯವರ ನೇತೃತ್ವದಲ್ಲಿ ಅಸಹಕಾರ ಚಳವಳಿ ಪ್ರಾರಂಭವಾದುದು.

೩. ೧೯೩೧ನೇ ಇಸವಿ ಆಗಸ್ಟ ೧: ಗಾಂಧೀಜಿಯವರಿಂದ ಸೂಚಿಸಲ್ಪಟ್ಟ ಚರಖಾಂಕಿತ ಕೇಸರಿ ಬಿಳಿ ಹಸುರು ತ್ರಿವರ್ಣ ಧ್ವಜವನ್ನು ವರ್ಕಿಂಗ್ ಕಮಿಟಿಯು ಕೊಂಗ್ರೆಸಿನ ಧ್ವಜವನ್ನಾಗಿ ಸ್ವೀಕರಿಸಿತು

೪. ೧೯೩೨ನೇ ಇಸವಿ ಆಗಸ್ಟ ೧೭: ಬ್ರಿಟಿಷ್ ಪ್ರಧಾನ ಮಂತ್ರಿಗಳಿಂದ ಜಾತೀಯ ನಿರ್ಣಯ ಘೋಷಣೆಯಾದುದು.

೫. ೧೯೩೫ನೇ ಇಸವಿ ಆಗಸ್ಟ ೪: ೧೯೩೫ರ ಹಿಂದೂಸ್ಥಾನ ಕಾಯಿದೆಯು ಬ್ರಿಟಿಷ ಅರಸರ ಒಪ್ಪಿಗೆ ಪಡೆಯಿತು.

೬. ೧೯೪೨ನೇ ಇಸವಿ ಆಗಸ್ಟ ೨: ಕೊಡುವುದು ನಿಜವಾದ ಸ್ವಾತಂತ್ರ್ಯವಾದರೆ ಅದನ್ನು ಮುಸ್ಲಿಂ ಲೀಗಿಗೆ ಕೊಟ್ಟು ಬ್ರಿಟಿಷರು ಇಲ್ಲಿಂದ ಹೋದರೂ ಅಡ್ಡಿ ಇಲ್ಲವೆಂದು ಕಾಂಗ್ರೆಸ ಅಧ್ಯಕ್ಷರು ಸಾರಿದುದು.

೭. ೧೯೪೨ನೇ ಇಸವಿ ಆಗಸ್ಟ ೮: ಮುಂಬಯಿಯಲ್ಲಿ ಕೂಡಿದ ಅಖಿಲ ಭಾರತ ಕೊಂಗ್ರೆಸಿನ ಸಮಿತಿಯು 'ಚಲೇ ಜಾವ್' ನಿರ್ಣಯ ಕೈಕೊಂಡಿತು.

೮. ೧೯೪೭ನೇ ಇಸವಿ ಆಗಸ್ಟ ೧೫: ಬ್ರಿಟೀಷರ ಅಧಿಕಾರತ್ಯಾಗ. ಭಾರತ ಪಾಕಿಸ್ತಾನಗಳ ಉದಯ.

---

## ೧೯೪೭ನೇ ಇಸವಿ ಆಗಸ್ಟ ೧೫ರ ನಂತರದ ಪ್ರಥಮ ಸ್ವತಂತ್ರ ಭಾರತದ ಆಡಳಿತ ವರ್ಗ.

ಗವರ್ನರ ಜನರಲ್: ಲಾರ್ಡ್ ಮೌಂಟ್ ಬ್ಯಾಟನ್.

### ಕೇಂದ್ರ ಮಂತ್ರಿಮಂಡಲ:

೧. ಶ್ರೀ| ಪಂಡಿತ ಜವಾಹರಲಾಲ ನೆಹರು, ಮುಖ್ಯಮಂತ್ರಿ, ವಿದೇಶ ಖಾತೆ.
೨. ,, ಸರದಾರ ವಲ್ಲಭಭಾಯಿ ಪಟೇಲ—ಉಪಪ್ರಧಾನ, ಗೃಹ ಮತ್ತು ಸುದ್ದಿ ಖಾತೆ.
೩. ,, ಡಾ| ರಾಜೇಂದ್ರ ಪ್ರಸಾದ—ಆಹಾರ ಮತ್ತು ಒಕ್ಕಲತನ ಖಾತೆ.
೪. ,, ಸರದಾರ ಬಲದೇವ ಸಿಂಗ—ಸಂರಕ್ಷಣಾ ಖಾತೆ
೫. ,, ಆರ್ ಕೆ. ಷಣ್ಮುಖಂ ಚೆಟ್ಟಿ—ಹಣಕಾಸು ಖಾತೆ.
೬. ,, ಡಾ| ಬಿ. ಆರ್. ಅಂಬೇಡಕರ್—ಕಾಯಿದೆ ಖಾತೆ.
೭. ,, ಡಾ| ಜಾನ್ ಮಥಾಯಿ—ರೈಲ್ವೆ ಖಾತೆ.
೮. ,, ಡಾ| ಶ್ಯಾಮಪ್ರಸಾದ ಮುಖರ್ಜಿ—ಉದ್ಯೋಗ ಮತ್ತು ಪೂರೈಕೆ [ಖಾತೆ.
೯. ,, ಸಿ. ಎಚ್. ಭಾಭಾ—ವಾಣಿಜ್ಯ ಖಾತೆ.
೧೦. ,, ಎನ್. ವಿ. ಗಾಡಗೀಳ—ಗಣಿಗಳು ಮತ್ತು ವಿದ್ಯುಚ್ಛಕ್ತಿ ಖಾತೆ.
೧೧. ,, ರಫಿ ಅಹಮದ್ ಕಿದ್ವಾಯಿ—ಸಂಪರ್ಕ ಖಾತೆ.
೧೨ ಶ್ರೀಮತಿ ರಾಜಕುಮಾರಿ ಅಮೃತಕೌರ್—ಆರೋಗ್ಯ ಖಾತೆ.
೧೩. ಶ್ರೀ| ಮೌಲಾನಾ ಅಬ್ದುಲ ಕಲಂ ಅಝಾದ—ಶಿಕ್ಷಣ ಖಾತೆ.
೧೪ ,, ಜಗಜೀವನರಾಮ—ಕೂಲಿಕಾರ ಖಾತೆ.
೧೫. ,, ಕೆ. ಸಿ. ನಿಯೋಗಿ—ನಿರಾಶ್ರಿತ ಸಂರಕ್ಷಣೆ ಖಾತೆ.
೧೬ ,, ಗೋಪಾಲಸ್ವಾಮಿ ಅಯ್ಯಂಗಾರ.

### ಪ್ರಾಂತೀಯ ಗವರ್ನರ್ ಮತ್ತು ಮುಖ್ಯಮಂತ್ರಿಗಳು

೧. ಮುಂಬೈ: ಸರ್ ಜಾನ್ ಕೋಲವಿಲೆ, ಶ್ರೀ| ಬಾಳಾ ಸಾಹೆಬ ಖೇರ್
೨. ಮದ್ರಾಸ: ಸರ್ ಆರ್ಚಿ ಬಾಲ್ಡ್ನೈ ,, ಓಮಂದೂರ ರಾಮಸ್ವಾಮಿ ರೆಡ್ಡಿ.

೩. ಯುಕ್ತಪ್ರಾಂತ: a) ಶ್ರೀ। ಡಾ। ಬಿಧನ ಚಂದ್ರರಾಯ (ನಿಯೋಜಿತ)    ಶ್ರೀ। ಪಂಡಿತ ಗೋವಿಂದ ವಲ್ಲಭಪಂತ.
b) ಶ್ರೀಮತಿ ಸರೋಜಿನಿ ನಾಯುಡು (ತಾತ್ಪೂರ್ತಿಕ)
೪. ಮಧ್ಯಪ್ರಾಂತ:
ಶ್ರೀ। ಮಂಗಳದಾಸ ಪಕ್ವಾಸಾ    ಶ್ರೀ ರವಿಶಂಕರ ಶುಕ್ಲ
೫. ಬಿಹಾರ: ಜಯರಾಮದಾಸ ದೌಲತರಾಮ    ,, ಶ್ರೀಕೃಷ್ಣ ಸಿಂಹ
೬. ಆಸ್ಸಾಮ: ಸರ್ ಅಕ್ಬರ್ ಹೈದರಿ    ,, ಗೋಪಿನಾಥ ಬಾರ್ದೊಲಾಯಿ
೭. ಒರಿಸ್ಸಾ: ಶ್ರೀ। ಕೈಲಾಸನಾಥ ಕಟ್ಜು    ,, ಹರೇಕೃಷ್ಣ ಮೆಹತಾಬ
೮. ಪೂರ್ವ ಪಂಜಾಬ:
ಸರ್ ಚಂದೂಲಾಲ ತ್ರಿವೇದಿ    ,, ಗೋಪಿಚಂದ ಭಾರ್ಗವ
೯. ಪ. ಬಂಗಾಲ:
ಶ್ರೀ। ಸಿ. ರಾಜಗೋಪಾಲಾಚಾರ್ಯ    ಡಾ। ಪಿ. ಸಿ ಘೋಷ

---

## ಪಾಕಿಸ್ಥಾನದ ಪ್ರಥಮ ಸರಕಾರ ಮತ್ತು ಆಡಳಿತ ಮಂಡಳಿ.

ಗವರ್ನರ್ ಜನರಲ್: ಖ್ವಾಯದೆ-ಈ-ಅಝಮ್ ಮಹಮ್ಮದ್ ಅಲಿ ಜಿನ್ನಾ.

### ಕೇಂದ್ರ ಮಂತ್ರಿಮಂಡಲ:

೧. ಮಿ। ಲಿಯಾಕತ್ ಅಲಿಖಾನ್—ಮುಖ್ಯಮಂತ್ರಿ, ವಿದೇಶ ಮತ್ತು ಸಂರಕ್ಷಣೆ [ಖಾತೆ
೨. ಮಿ। ಗುಲಾಮ ಮಹಮದ್—ಹಣಕಾಸು ಖಾತೆ
೩. ಮಿ। ಘಜ್ನಫರ ಅಲಿಖಾನ್—ಗೃಹ, ಆಹಾರ, ಒಕ್ಕಲುತನ ಮತ್ತು ಆರೋಗ್ಯ ಖಾತೆ.
೪. ಸರದಾರ ಅಬ್ದುಲ್ ರಬ ನಿಸ್ತಾರ—ರೈಲು, ಸಾರಿಗೆ, ಸುದ್ದಿ, ಮತ್ತು ಆಕಾಶವಾಣಿ ಖಾತೆ.
೫. ಮಿ। ಐ. ಟಿ. ಚುಂದ್ರಿಗಾರ—ವ್ಯಾಪಾರ, ಉದ್ಯೋಗ ಮತ್ತು ಪೂರೈಕೆ ಖಾತೆ.
೬. ಶ್ರೀ। ಜೋಗೇಂದ್ರನಾಥ ಮಂಡಲ—ಕಾಯದೆ, ಶಿಕ್ಷಣ, ಗಣಿಗಳು ಮತ್ತು ವಿದ್ಯುಚ್ಛಕ್ತಿ ಖಾತೆ.

### ಪ್ರಾಂತೀಯ ಗವರ್ನರ್    ಮತ್ತು    ಮುಖ್ಯಾಮಾತ್ಯರು

೧. ಸರಹದ್ದ ಪ್ರಾಂತ್ಯ:
ಸರ್ ಜಾರ್ಜ ಕನಿಂಗಹ್ಯಾಮ    ಖಾನ ಅಬ್ದುಲ ಕಯೂಮ ಖಾನ
೨. ಪ.ಪಂಜಾಬ: ಸರ್ ಫ್ರಾನ್ಸಿಸ್ ಮೂಡಿ    ಖಾನ ಇಪ್ತಿಕಾರ ಹುಸೇನ
೩. ಸಿಂಧ: ಮಿ। ಗುಲಾಮ
ಹುಸ್ಸೇನ ಹಿದಾಯತುಲ್ಲಾ    ಮಿ। ಎಂ. ಎ. ಖುಹ್ರೋ
೪. ಪೂ. ಬಂಗಾಲ: ಎಫ್. ಸಿ. ಬೋರ್ನ    ಖ್ವಾಜಾ ನಜೀಮುದ್ದೀನ.

---

# ನಡೆದ ವಿಶೇಷ ಘಟನೆಗಳು

೧. ೧೮೫೭ನೇ ಇಸವಿಯಿಂದ ೧೮೫೮ರ ವರೇಗೆ ಪ್ರಥಮ ಹಿಂದೀ ಸ್ವಾತಂತ್ರ್ಯ ಸಮರ..

೨ ೧೮೮೫ನೇ ಇಸವಿ: ಹಿಂದೀ ರಾಷ್ಟ್ರೀಯ ಕೊಂಗ್ರೆಸಿನ ಸ್ಥಾಪನೆ.

೩. ೧೯೦೬ನೇ ಇಸವಿ: ಕೊಂಗ್ರೆಸು ಕಲ್ಕತ್ತೆಯಲ್ಲಿ ಕೂಡಿದಾಗ ಅಧ್ಯಕ್ಷಸ್ಥಾನದಿಂದ ಶ್ರೀ। ದಾದಾಭಾಯಿ ನವರೋಜಿಯವರು ಸ್ವರಾಜ್ಯವೇ ಕೊಂಗ್ರೆಸಿನ ಧ್ಯೇಯವೆಂದು ಸಾರಿದುದು.

೪. ೧೯೦೮ನೇ ಇಸವಿ: ಕ್ರಾಂತಿಕಾರ ಖುದಿರಾಮ ಬೋಸನಿಗೆ ಗಲ್ಲು.

೫. ೧೯೨೦ನೇ ಇಸವಿ: ಹಂಟರ ಕಮಿಟಿ ವರದಿ.

೬. ೧೯೨೦ನೇ ಇಸವಿ ನವಂಬರ ೨೦: ಗಾಂಧೀಜಿಯವರ ನೇತೃತ್ವದಲ್ಲಿ ಅಸಹಕಾರ ಚಳವಳಿ ಪ್ರಾರಂಭ. ಲೋಕಮಾನ್ಯ ತಿಲಕರ ನಿಧನ.

೭. ೧೯೨೧ನೇ ಇಸವಿ: ಮಲಬಾರದಲ್ಲಿ ಮಾಪಿಳ್ಳಾ ದಂಗೆ. ಕೊಂಗ್ರೆಸ್ಸಿನ ನಾಲ್ಕಾಣೆ ಸದಸ್ಯತನ ಆರಂಭ

೮. ೧೯೨೨ನೇ ಇಸವಿ: ಚೌರಿಚೋರಾ ದುರಂತ, ಗಾಂಧೀಜಿಯವರ ಕೈದು.

೯. ೧೯೨೩ನೇ ಇಸವಿ: ಉಪ್ಪಿನ ಮೇಲೆ ತೆರಿಗೆ ಪ್ರಾರಂಭ.

೧೦. ೧೯೨೮ನೇ ಇಸವಿ: ಸೈಮನ ಸಪ್ತಕದ ಆಗಮನ ಮತ್ತು ಆದರ ಮೇಲೆ ಬಹಿಷ್ಕಾರ. ಸರದಾರ ವಲ್ಲಭಭಾಯಿ ಪಟೇಲರ ನೇತೃತ್ವದಲ್ಲಿ ಬಾರ್ಡೋಲಿಯಲ್ಲಿ ಕರನಿರಾಕರಣೆ ಯಶಸ್ವಿಯಾಗಿ ನಡೆಯಿತು.

೧೧. ೧೯೨೯ನೇ ಇಸವಿ: ಜನವರಿ ೨೬ ಸ್ವಾತಂತ್ರ್ಯ ದಿನವೆಂದು ನಿಶ್ಚಯಿಸಿದುದು.

೧೯೩೦ನೇ ಇಸವಿ: ಸವಿನಯ ಕಾಯದೆಭಂಗ ಚಳವಳಿ ಪ್ರಾರಂಭ. ದಂಡೀ ಯಾತ್ರೆ. ಗಾಂಧೀಜಿಯವರ ಕೈದು. ನವಂಬರ ೧೨ಕ್ಕೆ ಪ್ರಥಮ ದುಂಡುಮೇಜು ಪರಿಷತ್ತು.

೧೩. ೧೯೩೧ನೇ ಇಸವಿ: ಭಗತಸಿಂಗ, ರಾಜಗುರು, ಶುಕದೇವರಿಗೆ ಗಲ್ಲು. ಮಾರ್ಚ ೪ಕ್ಕೆ ಗಾಂಧಿ—ಇರ್ವಿನ್ ಒಪ್ಪಂದ. ೨ನೇ ದುಂಡುಮೇಜಿನ ಪರಿಷತ್ತಿಗೆ ಗಾಂಧೀಜಿಯವರು ಪ್ರತಿನಿಧಿಯಾಗಿ ಪ್ರಯಾಣಮಾಡಿದುದು.

೧೪. ೧೯೪೦ನೇ ಇಸವಿ: ಸಂಪೂರ್ಣ ಸ್ವಾತಂತ್ರ್ಯ ಹಾಗೂ ತಾತ್ಪೂರ್ತಿಕ ರಾಷ್ಟ್ರೀಯ ಸರಕಾರದ ಸ್ಥಾಪನೆಯ ಬೇಡಿಕೆ. ಮುಸ್ಲಿಂ ಲೀಗು ಪಾಕಿಸ್ತಾನದ ಬಗ್ಗೆ ನಿರ್ಣಯ ಸ್ವೀಕರಿಸಿತು.

೧೫. ೧೯೪೨ನೇ ಇಸವಿ: ಸಿಂಗಪೂರದಲ್ಲಿ ಜನರಲ್ ಮೋಹನ ಸಿಂಗರ ನೇತೃತ್ವದಲ್ಲಿ ಮೊದಲನೇ ಹಿಂದೀ ರಾಷ್ಟ್ರೀಯ ಸೇನೆಯ ನಿರ್ಮಾಣ.

೧೬. ೧೯೪೨ನೇ ಇಸವಿ: ಸುಭಾಸ ಬೋಸರ ನೇತೃತ್ವದಲ್ಲಿ ಸಿಂಗಾಪುರದಲ್ಲಿ ಆಜಾದ ಸೈನಿಕ ಪಡೆಯ ಪ್ರಾರಂಭ.

೧೭. ೧೯೪೭ನೇ ಇಸವಿ: ಮಾರ್ಚ ೨೪ರಲ್ಲು ಲಾರ್ಡ ಮೌಂಟಬ್ಯಾಟನ್ನರು ವೈಸರಾಯರಾದುದು. ಜೂನ್ ೩ರಲ್ಲು ಬ್ರಿಟಿಷರ ಕೊನೆಯ ಘೋಷಣೆ. ಅಗಸ್ಟ ೧೫ರಲ್ಲು ಸ್ವತಂತ್ರ ಭಾರತ ಮತ್ತು ಪಾಕಿಸ್ತಾನಗಳ ಸ್ಥಾಪನೆ.

---

## ೧೯೪೭ನೇ ಇಸವಿಯ ವರೆಗಿನ ಕೊಂಗ್ರೆಸ್ ಅಧಿವೇಶನಗಳು ನಡೆದ ಸ್ಥಳಗಳು.

೧ ಲಾಹೋರು, ೮ನೇ, ೧೬ನೇ, ೨೪ನೇ, ೪೪ನೇ, ಹೀಗೆ ೪ ಅಧಿವೇಶನಗಳು
೨ ಅಮೃತಸರ: ೩೪ನೇ ಅಧಿವೇಶನ
೩ ಮೀರತ್: ೫೪ನೇ ಅಧಿವೇಶನ
೪ ಢಿಲ್ಲಿ: ೩೩ನೇ ಅಧಿವೇಶನ
೫ ಕಾನಪುರ: ೪೦ನೇ ಅಧಿವೇಶನ
೬ ಲಕ್ನೊ: ೧೫ನೇ, ೩೧ನೇ, ೪೯ನೇ, ಹೀಗೆ ಮೂರು ಅಧಿವೇಶನಗಳು
೭ ಗೌಹತಿ: ೪೧ನೇ ಅಧಿವೇಶನ
೮ ಅಲಹಾಬಾದ: ೪ನೇ, ೮ನೇ, ೨೫ನೇ ಹೀಗೆ ಮೂರು ಅಧಿವೇಶನ
೯ ಬನಾರಸ: ೨೧ನೇ ಅಧಿವೇಶನ
೧೦ ಬಂಕೀಪುರ: ೨೭ನೇ ಅಧಿವೇಶನ
೧೧ ಗಯಾ: ೩೭ನೇ ಅಧಿವೇಶನ
೧೨ ರಾಮಘಡ: ೫೩ನೇ ಅಧಿವೇಶನ
೧೩ ಕಲ್ಕತ್ತಾ: ೨ನೇ, ೬ನೇ, ೧೨ನೇ, ೧೭ನೇ, ೨೨ನೇ, ೨೬ನೇ, ೩೨ನೇ, ೪೩ನೇ, ೪೬ನೇ ಹೀಗೆ ೯ ಅಧಿವೇಶನಗಳು
೧೪ ತ್ರಿಪುರಿ: ೫೨ನೇ ಅಧಿವೇಶನ
೧೫ ಕರಾಚಿ: ೨೮, ೪೫ನೇ ಹೀಗೆ ಎರಡು ಅಧಿವೇಶನಗಳು
೧೬ ಅಹಮದಾಬಾದ: ೧೮, ೩೬ನೇ ಹೀಗೆ ಎರಡು ಅಧಿವೇಶನಗಳು
೧೭ ಹರಿಪುರ: ೫೧ನೇ ಅಧಿವೇಶನ
೧೮ ಸೂರತ: ೨೩ನೇ ಅಧಿವೇಶನ
೧೯ ಫೈಝಪುರ: ೫೦ನೇ ಅಧಿವೇಶನ
೨೦ ಅಮರಾವತಿ: ೧೩ನೇ ಅಧಿವೇಶನ
೨೧ ನಾಗಪುರ: ೭, ೩೫ನೇ ಹೀಗೆ ಎರಡು ಅಧಿವೇಶನಗಳು
೨೨ ಪುಣೆ: ೧೧ನೇ ಅಧಿವೇಶನ
೨೩ ಬೆಳಗಾಂವಿ: ೩೯ನೇ ಅಧಿವೇಶನ
೨೪ ಕಾಕಿನಾಡ: ೩೮ನೇ ಅಧಿವೇಶನ

೨೫ ಮದ್ರಾಸು: ೩, ೧೦, ೧೪, ೧೯, ೨೩, ೨೯, ೪೨ನೇ (ಮತ್ತು ಕಳೆದ ವರ್ಷ ೬೦ನೇ) ಹೀಗೆ ೮ ಅಧಿವೇಶನಗಳು ನಡೆದುವು.

೨೬ ಮುಂಬಾಯಿ: ೧, ೫, ೨೦, ೩೦, ೪೬, ೪೮ನೇ ಹೀಗೆ ೬ ಅಧಿವೇಶನಗಳು ನಡೆದುವು

**೧೯೫೪ನೇ ದಶಂಬರಕ್ಕೆ ಕಾಂಗ್ರೆಸಿಗೆ ಸರಿಯಾಗಿ ೬೦ ವರ್ಷ.**

## ಅಸಹಕಾರ ಮತ್ತು ಸತ್ಯಾಗ್ರಹ ಚಳವಳಿಗಳ ಮಹತ್ವ

೧. ಸನ್ ೧೯೪೧ರಿಂದ ೨೨ರ ವರೆಗೆ: ಅಸಹಕಾರ ಚಳವಳಿ ಪ್ರಾರಂಭ— ಪಿಕೆಟಿಂಗ್, ಹರತಾಳಗಳು. ಕೋರ್ಟು ಕಾಲೇಜುಗಳ ಬಹಿಷ್ಕಾರ ಇತ್ಯಾದಿ— ಮೂವತ್ತು ಸಾವಿರಕ್ಕೂ ಮೇಲ್ಪಟ್ಟು ಸತ್ಯಾಗ್ರಹಿಗಳು ಸೆರೆಮನೆ ಸೇರಿ ಶಿಕ್ಷೆಗೊಳಗಾಗಿದ್ದರು.

೨. ೧೯೩೦ನೇ ಇಸವಿ: ಸವಿನಯ ಕಾಯದೆ ಭಂಗ ಚಳವಳಿ—(ಉಪ್ಪಿನ ಸತ್ಯಾಗ್ರಹ) ೧ ಲಕ್ಷ ಜನರು ಸೆರೆಮನೆ ಸೇರಿದ್ದರು— ಕರಬಂದಿ ಚಳವಳಿ—ವಿದೇಶ ವಸ್ತ್ರ, ಸೇಂದಿ ಅಂಗಡಿ ಪಿಕೇಟಿಂಗ್, ಎಲ್ಲ ತರಹ ಕಾಯದೆ ಭಂಗ—ಈ ಚಳವಳ ಕಾಲದಲ್ಲಿ ೧೨ ಕರಾಳ ಶಾಸನಗಳನ್ನು ಬ್ರಿಟಿಷ ಸರಕಾರ ಮಾಡಿತ್ತು.

೩. ೧೯೩೨ನೇ ಇಸವಿ: ಪುಂಡುಗಂದಾಯ, ಸಾಮೂಹಿಕ ಕಂದಾಯಗಳ ವಿರುದ್ಧ ಚಳವಳಿ. ೭೫ ಸಾವಿರ ಸತ್ಯಾಗ್ರಹಿಗಳು ಸೆರೆಮನೆ ಸೇರಿದ್ದರು.

೪. ೧೯೪೦ನೇ ಇಸವಿಯಿಂದ ೧೯೪೧: ವೈಯಕ್ತಿಕ ಸತ್ಯಾಗ್ರಹ, ಅಕ್ಟೋಬರ ೧೭,೧೯೪೦ನೇ ಇಸವಿಯ ದಿನ ಆಚಾರ್ಯ ವಿನೋಬಾಭಾವೆಯವರಿಂದ ಸತ್ಯಾಗ್ರಹ ಆರಂಭ—ಮೂವತ್ತು ಸಾವಿರ ಸತ್ಯಾಗ್ರಹಿಗಳ ಭಾಗ—೫॥ ಲಕ್ಷ ರೂಪ್ಯಾಗಳಷ್ಟು ದಂಡವನ್ನೂ ಸರಕಾರವು ಸತ್ಯಾಗ್ರಹಿಗಳಿಂದ ವಸೂಲಿ ಮಾಡಿತ್ತು—ಈ ಸತ್ಯಾಗ್ರಹದಲ್ಲಿ ಕರ್ನಾಟಕದಿಂದ ೧೧೮೮ ಮಂದಿ ಸತ್ಯಾಗ್ರಹಿಗಳು ಭಾಗವಹಿಸಿದ್ದರು ಮತ್ತು ೨೭ ಸಾವಿರ ದಂಡ ಕೊಟ್ಟರು.

೫. ೧೯೪೨ರ "ಚಲೇಜಾವ್" (Quit India) ಚಳವಳಿಯ **ಉಗ್ರರೂಪ:** ಗಾಂಧೀಜಿ ಹಾಗೂ ಅನೇಕ ಪ್ರಮುಖ ಮುಖಂಡರ ಬಂಧನ— ದೇಶದಲ್ಲೆಲ್ಲಾ ಪ್ರಚಂಡ ಹರತಾಳ, ಮೆರವಣಿಗೆ ಸಭೆಗಳಾಗಿದ್ದುವು—'ಮಾಡುವಾ ಇಲ್ಲವೆ ಮಡಿಯುವಾ' ಎಂಬ ಬಾಪೂರವರ ದಿವ್ಯಮಂತ್ರದ ಆದೇಶದಂತೆ ಜನರು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು—ಲಾಠಿ, ಅಶ್ರುವಾಯು, ಗುಂಡಿನ ಮಳೆ, ವಿಮಾನಗಳಿಂದ ಬಾಂಬು, ಮಿಲಿಟರಿ ಗಸ್ತು, ಮಿಲಿಟರಿ ಕಾಯದೆ ಮೊದಲಾದ ಉಗ್ರೋಪಾಯಗಳನ್ನು ಬ್ರಿಟಿಷ ಸರಕಾರ ಮಾಡಿತ್ತು—ಗುಂಡಿನಿಂದ ೩೨೯ ಮಂದಿ ಸತ್ತಿದ್ದರು—೮೭೧೯ ಮಂದಿ ಗಾಯಗೊಂಡಿದ್ದರು—೫೩೮ ಕಡೆಗಳಲ್ಲಿ ಗುಂಡು ಹಾರಿಸಲಾಗಿತ್ತು—೩೦ ಕಡೆಗಳಲ್ಲಿ ಅಶ್ರುವಾಯು ಉಪಯೋಗಿಸಲ್ಪಟ್ಟಿತ್ತು— ಒಂದು ಲಕ್ಷದ ಮೂವತ್ತು ಸಾವಿರ ಮಂದಿಗಳು ಬಂಧಿತರಾಗಿದ್ದರು—೬೦ ಕಡೆಗಳಲ್ಲಿ

ಮಿಲಿಟರಿ ತರಲಾಗಿತ್ತು—೬ ಕಡೆಗಳಲ್ಲಿ ವಿಮಾನದಿಂದ ಬಾಂಬು ಹಾಕಿದ್ದರು—ಬ್ರಿಟಿಷ ಸರಕಾರ ಸತ್ಯಾಗ್ರಹಿಗಳಿಂದ ೯೪,೫೪,೬೯೦ ರೂ. ಗಳನ್ನು ದಂಡ ವಸೂಲಿ ಮಾಡಿತ್ತು. ಈ ಸಮಯದಲ್ಲಿ ರೊಚ್ಚಿಗೆದ್ದ ಸತ್ಯಾಗ್ರಹಿಗಳು ೨೫ ರೈಲ್ವೆ ನಿಲ್ದಾಣಗಳ ಮೇಲೆ ಹಲ್ಲೆ ಮಾಡಿ ೧೧ ಕಡೆಗಳಲ್ಲಿ ಹಳಿತಪ್ಪಿಸಿ ಗಾಡಿ ಉರುಳಿಸಿದ್ದರು—೨೫ ಕಡೆಗಳಲ್ಲಿ ದೊಡ್ಡ ದೊಡ್ಡ ಸೇತುವೆಗಳನ್ನು ಕತ್ತರಿಸಿದ್ದರು—೧೬೮೦ ಸಂದರ್ಭಗಳಲ್ಲಿ ತಾರು ಕತ್ತರಿಸಿದ್ದರು—೪೦ ಅಂಚೆ ಕಚೇರಿಗಳ ಮೇಲೆ ಹಲ್ಲೆ ಮಾಡಿದ್ದರು—೧೬೭ ಕಡೆಗಳಲ್ಲಿ ಟಪಾಲು ಚೀಲ, ಡಬ್ಬಿ ಇತ್ಯಾದಿಗಳ ಸುಲಿಗೆ ಮಾಡಿದ್ದರು—೨೨೫ ಕಡೆಗಳ ಹಳ್ಳಿ ದಫ್ತರಗಳ ನಾಶಮಾಡಿದ್ದರು—೨೮೨ ಕಡೆಗಳ ಚಾವಡಿ, ಡಾಕಬಂಗ್ಲೆಗಳ ಮೇಲೆ ಹಲ್ಲೆ ಮಾಡಿದ್ದರು—೧೦೫ ಸೇಂದಿ ಅಂಗಡಿ, ಪಖಾಲಿಗಳ ನಾಶ ಮಾಡಿದ್ದರು—೧೦೩,೦೦೦ ರೂಪಾಯಿಗಳನ್ನು ಸರಕಾರದ ಆಫೀಸುಗಳಿಂದ ಲೂಟಿ ಮಾಡಿ ದೋಚಿದ್ದರು.

## ೧೯೪೨ನೇ ಇಸವಿಯ 'ಚಲೇಜಾವ' ಚಳವಳಿಯಲ್ಲಿ ಗೋಳಿಬಾರು ನಡೆದ ಕರ್ನಾಟಕದ ಸ್ಥಳಗಳು:

೧. ಬೈಲುಹೊಂಗಲ, ೨. ನಿಪ್ಪಾಣಿ, ೩. ಶಿವಪುರ, ೪. ಕೋಳಿಗುಡ್ಡ, ೫. ಕವಟೇಕೊಪ್ಪ, ೬. ಹುಬ್ಬಳ್ಳಿ, ೭. ಹೊಸರಿತ್ತಿ, ೮. ಬೆಂಗಳೂರು, ೯ ದಾವಣಗೆರೆ, ೧೦. ತಿಪಟೂರು, ೧೧. ದಾಸನಕೊಪ್ಪಳ, ೧೨. ಶ್ರವಣಬೆಳಗುಳ, ೧೩. ಚಿತ್ರದುರ್ಗ, ೧೪. ಇಸ್ಸೂರು, ೧೫. ಮೈಸೂರು, ೧೬. ತುಮಕೂರು, ೧೭. ಗುಬ್ಬಿ, ೧೮. ಹಾಸನ, ೧೯. ಸಂಕೇಶ್ವರ.

ಸ್ವಾತಂತ್ರ್ಯ ಸಮರದಲ್ಲಿ ಹೆಚ್ಚಿನ ಭಾರತೀಯ ಪತ್ರಿಕೆಗಳು ಸ್ವಾತಂತ್ರ್ಯಕ್ಕಾಗಿ ಪ್ರೋತ್ಸಾಹಿಸಿದವು.

---

೧. ೧೯೪೧ನೇ ಇಸವಿಯ ಜನಗಣನೆಯ ಪ್ರಕಾರ ದೇಶೀಯ ಸಂಸ್ಥಾನಗಳು ೭,೧೫,೯೬೪ ಚ. ಮೈಲು ವಿಸ್ತೀರ್ಣವಿದ್ದು ೯,೩೧,೮೯,೨೩೩ ಜನಸಂಖ್ಯೆಯಿತ್ತು.

೨. ಬ್ರಿಟಿಷ ಭಾರತ ೮,೬೫,೪೪೬ ಚ. ಮೈಲಿದ್ದು ೨೯,೫೮,೦೮,೭೨೨ ಜನಸಂಖ್ಯೆಯಿತ್ತು.

ದೇಶದ ವಿಭಜನೆಯ ನಂತರ:

ಭಾರತ: ೧೧,೧೯,೧೫೬ ಚ. ಮೈಲಿದ್ದು ಜನಸಂಖ್ಯೆ ೩೦,೮೮,೫೩,೦೦೦ ಆಗಿತ್ತು.

ಪಾಕಿಸ್ತಾನ: ೪,೧೫,೩೨೬ ಚ. ಮೈಲಿದ್ದು ೭,೩೫,೭೭,೦೦೦ ಜನಸಂಖ್ಯೆಯಾಗಿತ್ತು.

ಬ್ರಿಟಿಷ ಕಾಲದಲ್ಲಿ ಹಿಂದೂಸ್ಥಾನದಲ್ಲಿದ್ದ ಬಿಳಿಯ . ಸೈನಿಕನಿಗೆ ವೇತನವಲ್ಲದೆ ಪ್ರತಿ ವರುಷ ಒಬ್ಬೊಬ್ಬನಿಗೆ ೭೭೫ ರೂಪ್ಯಾ ವೆಚ್ಚವಾಗುತ್ತಿತ್ತು.



Edited, Printed & Published by K. V. Shenoy
at The Prabhat Printers, Ltd., Mangalore.